# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 661

ಸದಸ್ಯರ ಹೆಸರು : ಶ್ರೀ ಬಸವರಾಜ ಪಾಟೀಲ್ ಇಟಗಿ (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು)

ಉತ್ತರಿಸುವ ದಿನಾಂಕ : 25-09-2020.

ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಗ್ರಾಮ ಪಂಚಾಯತ್‌ಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅಭಿವೃದ್ಧಿ ಅಧಿಕಾರಿ ಹುದ್ದೆಯನ್ನು ಗ್ರೂಪ್-ಬಿ ಹುದ್ದೆಗೆ ಮೇಲ್ದರ್ಜೆಗೇರಿಸುವುದು ಮತ್ತು 2 ಹೆಚ್ಚುವರಿ ಸಹಾಯಕ ನಿರ್ದೇಶಕ ಹುದ್ದೆಗಳನ್ನು ಸೃಜಿಸುವ ಸಂಬಂಧ ಸರ್ಕಾರಕ್ಕೆ ಪ್ರಸ್ತಾವನೆ ಬಂದಿದೆಯೇ; | ಹೌದು. |
| (ಆ) | ಬಂದಿದ್ದಲ್ಲಿ, ಸರ್ಕಾರ ಇಲ್ಲಿಯವರೆಗೆ ಪ್ರಸ್ತಾವನೆಗೆ ಅನುಮೋದನೆ ನೀಡಿಲ್ಲವೇಕೆ ಮತ್ತು ಪ್ರಸ್ತಾವನೆಗೆ ಯಾವಾಗ ಅನುಮೋದನೆ ನೀಡಲಾಗುವುದು; | ಆರ್ಥಿಕ ಇಲಾಖೆಯ ಅಭಿಪ್ರಾಯದ ಮೇರೆಗೆ ಪಂಚಾಯತಿ ಅಭಿವೃದ್ಧಿ ಅಧಿಕಾರಿ ಹುದ್ದೆಯನ್ನು ಗ್ರೂಪ್ ಬಿ ಹುದ್ದೆಗೆ ಮೇಲ್ದರ್ಜೆಗೇರಿಸುವ ಪ್ರಸ್ತಾವನೆಯನ್ನು 6ನೇ ಕರ್ನಾಟಕ ರಾಜ್ಯ ವೇತನ ಆಯೋಗದ ಮುಂದೆ ಮಂಡಿಸಲಾಗಿತ್ತು. 6ನೇ ರಾಜ್ಯ ವೇತನ ಆಯೋಗವು ತನ್ನ ವರದಿಯ 2ನೇ ಸಂಪುಟದಲ್ಲಿ ಆರ್ಥಿಕ ಇಲಾಖೆಗೆ ಸಲ್ಲಿಸಿದ್ದು, ಗ್ರಾಮ ಪಂಚಾಯತಿಗಳ ಮೇಲ್ದರ್ಜೆಗೇರಿಸುವಿಕೆ ವಿಷಯವು ಸರ್ಕಾರದ ಹಂತದಲ್ಲಿ ಅದರ ಕಾರ್ಯನಿರ್ವಹಣೆಯ ಅಗತ್ಯತೆಗಳನ್ನು ಮತ್ತು ಇತರೆ ತತ್ಸಬಂಧ ಅಂಶಗಳನ್ನು ತೀರ್ಮಾನಿಸಬೇಕಾಗುತ್ತದೆ ಎಂದು ತಿಳಿಸಿರುತ್ತದೆ.<br><br>ರಾಜ್ಯದ ಗ್ರಾಮ ಪಂಚಾಯತ್‌ಗಳ ಪಂಚಾಯತ್ ಅಭಿವೃದ್ಧಿ ಅಧಿಕಾರಿ ಹುದ್ದೆಯನ್ನು ಗ್ರೂಪ್ ಬಿ ಹುದ್ದೆಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ ಆರ್ಥಿಕ ಇಲಾಖೆಯೊಂದಿಗೆ ಸಮಾಲೋಚಿಸಿ ಕ್ರಮ ಕೈಗೊಳ್ಳಲಾಗುವುದು.<br><br>ಪ್ರತಿ ತಾಲ್ಲೂಕಿಗೆ 2 ಹೆಚ್ಚುವರಿ ಸಹಾಯಕ ನಿರ್ದೇಶಕ (ಗ್ರಾ.ಉ) ಹುದ್ದೆಯನ್ನು ಸೃಜಿಸುವ ಬಗ್ಗೆ ಇಲಾಖಾ ಹಂತದಲ್ಲಿ ಪರಿಶೀಲಿಸಿ, ಆರ್ಥಿಕ ಇಲಾಖೆಯ ಸಹಮತಿಗಾಗಿ ಕಡತ ಸಂಖ್ಯೆ ಗ್ರಾಅಪ 05 ಕೆ.ಎಸ್.ಎಸ್.2016ನ್ನು ಮೂರು ಬಾರಿ ಆರ್ಥಿಕ ಇಲಾಖೆಯನ್ನು ಸಂಪರ್ಕಿಸಲಾಗಿದ್ದು, ಆರ್ಥಿಕ ಇಲಾಖೆಯು ಹುದ್ದೆಗಳ ಸೃಜನೆ ಬಗ್ಗೆ ಸಹಮತಿ ನೀಡಿರುವುದಿಲ್ಲ. |

| | | |
|---|---|---|
| (ಇ) | ರಾಜ್ಯ ಸ್ಥಳೀಯ ಸಂಸ್ಥೆಗಳನ್ನು ಬಲಿಷ್ಠ ಸ್ಥಳೀಯ ಸಂಸ್ಥೆಗಳನ್ನಾಗಿ ಮಾಡಲು ಕ್ರಮ ಕೈಗೊಂಡಿಲ್ಲವೇಕೆ? | ಪಂಚಾಯಿತಿ ಅಭಿವೃದ್ಧಿ ಅಧಿಕಾರಿ ಹುದ್ದೆ ಮೇಲ್ದರ್ಜೆಗೇರಿಸುವುದು ಮತ್ತು 2 ಹೆಚ್ಚುವರಿ ಸಹಾಯಕ ನಿರ್ದೇಶಕ ಹುದ್ದೆಗಳನ್ನು ಸೃಜಿಸುವುದರಿಂದ ಮಾತ್ರ ಪಂಚಾಯತ್ ರಾಜ್ ಸಂಸ್ಥೆಗಳನ್ನು ಬಲಿಷ್ಠಗೊಳಿಸಲು ಸಾಧ್ಯವಾಗುವುದಿಲ್ಲ.<br><br>ಪಂಚಾಯತ್ ರಾಜ್ ಸಂಸ್ಥೆಗಳಿಗೆ ಹೆಚ್ಚಿನ ಅಧಿಕಾರ ಮತ್ತು ಅನುದಾನ ನೀಡುವುದರಿಂದ ಪಂಚಾಯತ್ ರಾಜ್ ಸಂಸ್ಥೆಗಳನ್ನು ಬಲಿಷ್ಠಗೊಳಿಸಲು ಸಾಧ್ಯವಾಗುತ್ತದೆ.<br><br>ಪ್ರಸ್ತುತ. ಅಧಿಕಾರ ವಿಕೇಂದ್ರಿಕರಣ ನೀತಿಯಡಿ 29 ವಿಷಯಗಳನ್ನು ಪಂಚಾಯತ್ ರಾಜ್ ಸಂಸ್ಥೆಗಳಿಗೆ ವರ್ಗಾಯಿಸಲಾಗಿದೆ.<br><br>ಮೂರು ಹಂತದ ಪಂಚಾಯತ್ ರಾಜ್ ಸಂಸ್ಥೆಗಳಿಗೆ ಪ್ರಕಾರ್ಯಗಳನ್ನು ನಿರ್ದಿಷ್ಟಪಡಿಸಲಾಗಿದೆ.<br><br>ಜಿಲ್ಲಾ ಮಟ್ಟದಲ್ಲಿ ಯೋಜನೆಯನ್ನು ಸಂಯೋಜನೆಗೊಳಿಸಲು ಜಿಲ್ಲಾ ಯೋಜನಾ ಸಮಿತಿ, ತಾಲ್ಲೂಕು ಮಟ್ಟದಲ್ಲಿ ಯೋಜನೆಯನ್ನು ಸಂಯೋಜನೆಗೊಳಿಸಲು ತಾಲ್ಲೂಕು ಯೋಜನೆ ಮತ್ತು ಅಭಿವೃದ್ಧಿ ಸಮಿತಿ ಮತ್ತು ಗ್ರಾಮ ಪಂಚಾಯಿತಿ ಹಂತದಲ್ಲಿ ದೂರದೃಷ್ಟಿ ಯೋಜನೆ ರೂಪಿಸಲು ಅವಕಾಶ ಕಲ್ಪಿಸಲಾಗಿದೆ.<br><br>ಗ್ರಾಮ ಪಂಚಾಯಿತಿ ಮಟ್ಟದಲ್ಲಿ ವಿವಿಧ ಇಲಾಖೆಗಳ ಯೋಜನೆಗಳು/ಕಾರ್ಯಕ್ರಮಗಳನ್ನು ಮೇಲ್ವಿಚಾರಣೆ ಮಾಡಲು ಗ್ರಾಮ ಪಂಚಾಯಿತಿ ಅಧ್ಯಕ್ಷರ ಅಧ್ಯಕ್ಷತೆಯಲ್ಲಿ ಕೆ.ಡಿ.ಪಿ ಸಭೆ ನಡೆಸಲು ಅವಕಾಶ ಕಲ್ಪಿಸಲಾಗಿದೆ.<br><br>ಗ್ರಾಮ ಪಂಚಾಯಿತಿಗಳಲ್ಲಿ ಜನನ ಮತ್ತು ಮರಣ ಪ್ರಮಾಣ ಪತ್ರಗಳನ್ನು ವಿತರಿಸಲು ಅವಕಾಶ ಕಲ್ಪಿಸಲಾಗಿದೆ.<br><br>ವಿವಿಧ ಇಲಾಖೆಗಳ ಯೋಜನೆ/ಕಾರ್ಯಕ್ರಮಗಳನ್ನು ಹಂತ ಹಂತವಾಗಿ ಗ್ರಾಮ ಪಂಚಾಯಿತಿಗಳಿಗೆ ವರ್ಗಾಯಿಸಲು ಕ್ರಮಕೈಗೊಳ್ಳಲಾಗುತ್ತಿದೆ. |

ಸಂ. ಗ್ರಾಅಪ 719 ಗ್ರಾಪಂಅ 2020

**(ಕೆ.ಎಸ್. ಈಶ್ವರಪ್ಪ)**
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.

**ಕೆ.ಎಸ್. ಈಶ್ವರಪ್ಪ**
**ಗ್ರಾಮೀಣಾಭಿವೃದ್ಧಿ ಮತ್ತು**
**ಪಂಚಾಯತ್ ರಾಜ್ ಸಚಿವರು**